# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 984(1164)
**ಸದಸ್ಯರ ಹೆಸರು** : ಶ್ರೀ ಅರುಣ ಶಹಾಪುರ (ಶಿಕ್ಷಕರ ಕ್ಷೇತ್ರಯಿಂದ ಚುನಾಯಿತರಾದವರು)
**ಉತ್ತರಿಸುವ ದಿನಾಂಕ** : 07.03.2022
**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು.

<table>
<tr><th>ಕ್ರ.ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ</td><td>ಸರ್ಕಾರವು ಅನುದಾನಿತ ಶಾಲಾ ಕಾಲೇಜುಗಳಲ್ಲಿ 2015 ಡಿಸೆಂಬರ್ ವರೆಗಿನ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಯಾವಾಗ ಆದೇಶ ಹೊರಡಿಸಲಾಗಿದೆ.</td><td>ಖಾಸಗಿ ಅನುದಾನಿತ ಶಾಲಾ ಕಾಲೇಜುಗಳಲ್ಲಿ ದಿನಾಂಕ:31-12-2015ರವರೆಗೆ ವಿವಿಧ ಕಾರಣಗಳಿಂದ ತೆರವಾಗಿರುವ ನಿಗದಿತ ಕಾರ್ಯಭಾರವಿರುವ ಬೋಧಕ ಹುದ್ದೆಗಳಿಗೆ ಸರ್ಕಾರದ ಆದೇಶ ಸಂಖ್ಯೆ: ಇಡಿ 14 ಎಸ್.ಇ.ಪಿ 2017, ದಿನಾಂಕ:25/09/2018 ಹಾಗೂ ಸರ್ಕಾರದ ಪತ್ರ: ದಿನಾಂಕ:23-07-2021ರಲ್ಲಿ ಭರ್ತಿ ಮಾಡಲು ಆದೇಶ ಹೊರಡಿಸಲಾಗಿದೆ.</td></tr>
<tr><td>ಆ</td><td>ಹೊರಡಿಸಿದ್ದಲ್ಲಿ, ಎಷ್ಟು ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡಲಾಗಿದೆ. ಹಾಗೂ ಇಲ್ಲಿಯವರೆಗೆ ಎಷ್ಟು ಹುದ್ದೆಗಳನ್ನು ಭರ್ತಿ ಮಾಡಿಕೊಳ್ಳಲಾಗಿದೆ; ಬಾಕಿ ಇರುವ ಹುದ್ದೆಗಳ ಸಂಖ್ಯೆ ಎಷ್ಟು;(ಶಾಲಾ ಕಾಲೇಜುವಾರು ಹುದ್ದೆಗಳ ಸಂಖ್ಯೆಯನ್ನು ಒದಗಿಸುವುದು)</td><td>ಅನುದಾನಿತ ಪ್ರೌಢಶಾಲೆಗಳು:-<br><table><tr><th>ಕ್ರ.ಸಂ.</th><th>ಪ್ರೌಢ ಶಾಲೆಗಳಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ</th><th>ಅನುಮತಿ ನೀಡಲಾದ ಹುದ್ದೆಗಳ ಸಂಖ್ಯೆ</th><th>ಬಾಕಿ ಇರುವ ಹುದ್ದೆಗಳು</th></tr><tr><td>1.</td><td>2181</td><td>257</td><td>1924</td></tr></table><br>ಅನುಮತಿ ನೀಡಲಾದ 257 ಹುದ್ದೆಗಳ ಪೈಕಿ 54 ಹುದ್ದೆಗಳನ್ನು ಭರ್ತಿ ಮಾಡಲಾಗಿದೆ. ಇನ್ನುಳಿದ ಹುದ್ದೆಗಳನ್ನು ಭರ್ತಿ ಮಾಡುವ ಪ್ರಕ್ರಿಯೆ ಪರಿಶೀಲನೆಯಲ್ಲಿರುತ್ತದೆ.<br>ಅನುದಾನಿತ ಪದವಿಪೂರ್ವ ಕಾಲೇಜುಗಳು:-<br><table><tr><th>ಕ್ರ.ಸಂ</th><th>ಪದವಿಪೂರ್ವ ಕಾಲೇಜುಗಳಲ್ಲಿ ಖಾಲಿ ಇರುವ ಹುದ್ದೆಗಳ ಸಂಖ್ಯೆ</th><th>ಅನುಮತಿ ನೀಡಲಾದ ಹುದ್ದೆಗಳ ಸಂಖ್ಯೆ</th><th>ಬಾಕಿ ಇರುವ ಹುದ್ದೆಗಳು</th></tr><tr><td>1</td><td>998</td><td>323</td><td>675</td></tr></table><br>ಬಾಕಿ ಇರುವ 675 ಹುದ್ದೆಗಳ ಪೈಕಿ 436 ಹುದ್ದೆಗಳನ್ನು ಭರ್ತಿ ಮಾಡಲು ಆಡಳಿತ ಮಂಡಳಿಗಳು ಈವರೆಗೂ ಪ್ರಸ್ತಾವನೆಗಳನ್ನು ಸಲ್ಲಿಸಿರುವುದಿಲ್ಲ. ನಿರ್ದೇಶನಾಲಯದ ಹಂತದಲ್ಲಿ 239 ಹುದ್ದೆಗಳ ಪ್ರಸ್ತಾವನೆಗಳನ್ನು ವಿವಿಧ ಹಂತಗಳಲ್ಲಿ ಪರಿಶೀಲಿಸಲಾಗುತ್ತಿದೆ.<br><br>(ಅನುಬಂಧ-1)</td></tr>
</table>

| | | |
|---|---|---|
| ಇ | ಆರ್ಥಿಕ ಇಲಾಖೆಯು ಕೋವಿಡ್-19 ಸಮಸ್ಯೆಯ ಹಿನ್ನೆಲೆ ಆರ್ಥಿಕ ಮಿತವ್ಯಯದ ಆದೇಶವನ್ನು ಸಡಿಲಗೊಳಿಸಿದ ಸಂದರ್ಭದಲ್ಲಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಅನುಮತಿ ನೀಡಿದ ಹುದ್ದೆಗಳ ಸಂಖ್ಯೆ ಎಷ್ಟು; | ಈ ಹುದ್ದೆಗಳನ್ನು ಭರ್ತಿ ಮಾಡಲು 257 ಪ್ರಸ್ತಾವನೆಗಳನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ:23-02-2021ರಲ್ಲಿ 257 ಪ್ರಸ್ತಾವನೆ ಎಂಬುದರ ಬದಲಾಗಿ 257 ಬೋಧಕ ಹುದ್ದೆಗಳನ್ನು ಹಾಗೂ ಪದವಿ ಪೂರ್ವ ಕಾಲೇಜಿನ 173 ಹುದ್ದೆಗಳನ್ನು ಭರ್ತಿ ಮಾಡಲು ಸಹಮತಿ ನೀಡಿರುತ್ತದೆ. |
| ಈ | ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಯಲ್ಲಿ ಹುದ್ದೆಗಳ ಮಾಹಿತಿಗೂ ಆರ್ಥಿಕ ಇಲಾಖೆಯು ಅನುಮತಿ ನೀಡಿದ ಹುದ್ದೆಗಳ ಮಾಹಿತಿಗೂ ವ್ಯತ್ಯಾಸವಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ವ್ಯತ್ಯಾಸಕ್ಕೆ ಕಾರಣಗಳೇನು; ಹಾಗೂ ಕ್ರೂಢೀಕೃತ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಗೆ ಪ್ರಸ್ತಾವನೆ ಸಲ್ಲಿಸಲಾಗಿದೆಯೇ? (ಮಾಹಿತಿ ನೀಡುವುದು) | ಗಮನಕ್ಕೆ ಬಂದಿದೆ,<br><br>ಒಟ್ಟು 257 ಪ್ರಸ್ತಾವನೆಗಳನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿತ್ತು. ಆರ್ಥಿಕ ಇಲಾಖೆಯು ದಿನಾಂಕ: 23-02-2021ರಲ್ಲಿ 257 ಪ್ರಸ್ತಾವನೆ ಎಂಬುದರ ಬದಲಾಗಿ 257 ಬೋಧಕ ಹುದ್ದೆಗಳನ್ನು ಎಂದು ಪರಿಗಣಿಸಿ ಭರ್ತಿ ಮಾಡಿಕೊಳ್ಳಲು ಸಹಮತಿ ನೀಡಿರುತ್ತದೆ.<br><br>ಈ ಹಿನ್ನೆಲೆಯಲ್ಲಿ ದಿನಾಂಕ:31-12-2015 ರವರೆಗೆ ವಿವಿಧ ಕಾರಣಗಳಿಂದ ಖಾಲಿಯಾಗಿರುವ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಇಲಾಖೆಯ ಸಹಮತಿ ಕೋರಿ ಪುನಃ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ. |

ಇಪಿ 86 ಎಸ್‌ಇಎಸ್ 2022

(ಬಿ.ಸಿ.ನಾಗೇಶ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ
ಹಾಗೂ ಸಕಾಲ ಸಚಿವರು